ಹಿರಿಯ ನಾಯಕರು, ಪೋಷಕರು ಹಾಗೂ ಮಾರ್ಗದರ್ಶಕರಾಗಿರುತ್ತಾರೆ. ಇವರು ನೇರವಾಗಿ ಸಭೆಯಲ್ಲಿ ಭಾಗವಹಿಸುವುದಿಲ್ಲ. ಈ ಸಭೆಯ ನಂತರ ಸಭೆಯ ವರದಿಯನ್ನು ಅಷ್ಟಕ ನಯಕರು ಅಷ್ಟಕ ಸಭೆ ನಡೆಸಿ ಅಷ್ಟಕ ಸದಸ್ಯರಿಗೆ ಒಪ್ಪಿಸುತ್ತಾರೆ. ಈ ಕಾರ್ಯಕ್ರಮ ಪ್ರಜಾಪ್ರಭುತ್ವ ನಾಯಕತ್ವ ಹಾಗೂ ನಾಗರೀಕತೆಯ ಜವಾಬ್ದಾರಿಗಾಗಿ ತರಬೇತಿ ನೀಡುತ್ತದೆ. ಬಿ.ಪಿ.ಯವರು ಎಲ್ಲಾ ಆಡಳಿತ ಪದ್ಧತಿಗಿಂತಲೂ ಪ್ರಜಾಪ್ರಭುತ್ವವನ್ನು ಬಹುವಾಗಿ ಮೆಚ್ಚಿ ಚಳವಳಿಯ ಆಡಳಿ ಪದ್ಧತಿಯನ್ನಾಗಿ ಅಳವಡಿಸಿದರು. ಈ ಪದ್ಧತಿಯ ತರಬೇತಿ ನಮ್ಮ ರಾಷ್ಟ್ರಕ್ಕೆ ಅಗತ್ಯವೆಂದು ಮತ್ತೆ ಹೇಳಬೇಕಾಗಿಲ್ಲ.

ಸ್ಕೌಟಿಂಗ್-ಗೈಡಿಂಗ್, ಬಿ.ಪಿಯುವರು ಉದ್ದೇಶಿಸಿದಂತೆ ಆರೋಗ್ಯಕರ, ಆನಂದ ದಾಯಕ, ಜವಾಬ್ದಾರಿಯುತ ಪ್ರಜೆಗಳನ್ನು ನಿರ್ಮಾಣ ಮಾಡಬೇಕಾದರೆ, ಹಿರಿಯ ನಾಯಕರು ತಮ್ಮ ದಳ ಸಭೆಯಲ್ಲಿ (Troop / Company Meeting) ಅಷ್ಟಕ ಕಾರ್ಯಕ್ರಮಗಳನ್ನು 10 ರಿಂದ 15 ನಿಮಿಷಗಳ ಕಾಲ ಕಡ್ಡಾಯವಾಗಿ ನಡೆಸಬೆಕು. ಅದರ ಮೇಲ್ವಿಚಾರಣೆ ಮಾಡಬೇಕು ಹಾಗೂ ಬಿ.ಪಿ.ಯವರು "ಯುವಕರಲ್ಲಿ ವಿಶ್ವಾಸವಿಟ್ಟು ಜವಾಬ್ದಾರಿಯನ್ನು ನೀಡಿ ಅವರು ಏನನ್ನಾದರೂ ಸಾಧಿಸಬಲ್ಲರು" ಎಂದಿದ್ದಾರೆ. ಅಂತೆಯೇ ಕೆಲವು ಕಾರ್ಯಕ್ರಮಗಳ ಜವಾಬ್ದಾರಿಯನ್ನು ಸೂಕ್ತ ತರಬೇತಿ ಹಾಗೂ ಮಾರ್ಗದರ್ಶನದ ನಂತರ ಅವರಿಗೆ ನೀಡಲಾಗುವುದು.

* ಅಷ್ಟಕ ನಿಯೋಜಿತ ಚಟುವಟಿಕೆಗಳು
* ಅಷ್ಟಕ ಸಭೆ
* ಗೌರವ ನ್ಯಾಯ ಸಭೆ
* ಅಷ್ಟಕದ ಬಯಲು ಸಭೆ
* ಅಷ್ಟಕ ಅನ್ವೇಷಣೆ
* ಅಷ್ಟಕ ಹೊರಸಂಚಾರ
* ಅಷ್ಟಲ ಶಿಬಿರವಾಸ
* ಅಷ್ಟಕ ಸೇವಾಕಾರ್ಯ

ಇವುಗಳಲ್ಲದೆ ದಳದ ಎಲ್ಲಾ ಆಗುಹೋಗುಗಳಿಗೂ ಅಷ್ಟಕ ನಾಯಕರನ್ನು ಜವಾಬ್ದಾರಿಯುತರನ್ನಾಗಿ ಮಾಡಲಾಗುವುದು.

**ಅಷ್ಟಕ ಪದ್ಧತಿಯಲ್ಲಿ ಹಿರಿಯ ನಾಯಕರ ಪಾತ್ರ:**

ಹಿರಿಯ ನಾಯಕರು ಅಷ್ಟಕ ನಾಯಕಿಯನ್ನು ಅಷ್ಟಕದ ಅನುಮೋದನೆಯ ಮೇರೆಗೆ ಆಯ್ಕೆ ಮಾಡುತ್ತಾರೆ. ಇವರು ಹೆಚ್ಚು ಅನುಭವಶಾಲಿ ಹಾಗೂ ನಾಯಕತ್ವ ಲಕ್ಷಣಗಳನ್ನು ಹೊಂದಿರಬೇಕು.

ಅಷ್ಟಕ ನಾಯಕರನ್ನು ಎಲ್ಲಾ ಕಾರ್ಯಕ್ರಮ ಗಳಿಗೂ ಪೂರ್ವಭಾವಿಯಾಗಿ ತರಬೇತಿ ನೀಡಿರಬೇಕು. ಅವರು ಅಷ್ಟಕಕ್ಕೆ ಅರಿವು ಕೌಶಲಗಳನ್ನು ಸರಿಯಾಗಿ ವರ್ಗಾಯಿಸಲು ಸಮರ್ಥರೆಂಬುದನ್ನು ಖಾತ್ರಿ ಪಡಿಸಿಕೊಳಬೇಕು.

ಅವರ ನಾಯಕತ್ವ ನಡವಳಿಕೆ ಗಮನಿಸಿ ಮಾರ್ಗದರ್ಶನ ನೀಡಿ ಅವಶ್ಯವಿದ್ದರೆ ತಿದ್ದಬೇಕು.

ಅಷ್ಟ ಕಾರ್ಯ ನಿರತವಾಗಿದ್ದಾಗ ಹಿರಿಯ ನಾಯಕರ ಉಪಸ್ಥಿತಿ ಹಾಗೂ ಮೇಲ್ವಿಚಾರಣೆ ಅಗತ್ಯ.

ಅವರ ಕಾರ್ಯಕ್ಕೆ ಮೊದಲು ಮೆಚ್ಚಿಗೆ ಸೂಚಿಸಿ ನಂತರ ತಪ್ಪನ್ನು ಒಪ್ಪಮಾಡುವುದು ಆರೋಗ್ಯಕರ ಕ್ರಮವನ್ನು ಅನುಸರಿಸಬೇಕು

ನಿರಂತರವಾಗಿ ಅಷ್ಟಕ ಪದ್ಧತಿ ಅಳವಡಿಸುವುದ ರಿಂದ ತಾನೇ ತಾನಾಗಿ ಮಕ್ಕಳಲ್ಲಿ ಚಾರಿತ್ರ್ಯಾಭಿವೃದ್ಧಿ ಯಾಗುತ್ತದೆ.

ಮಕ್ಕಳಿಗೆ ಅಷ್ಟಕ ಸಭೆ, ಗೌರವ ನ್ಯಾಯ ಸಭೆಯಲ್ಲಿ ಚರ್ಚಿಸಲು ತೀರ್ಮಾನ ಕೈಗೊಳ್ಳಲು ಅವಕಾಶ ನೀಡಬೇಕು.

ತರಬೇತಿ ನಿಂತ ನೀರಾಗಬಾರದು. ಹಿರಿಯ ನಾಯಕರು ತರಬೇತಿ ಪಡೆದು ತಮ್ಮ ಸಾಮರ್ಥ್ಯವನ್ನು ಅಭಿವೃದ್ಧಿಗೊಳಿಸಿಕೊಳ್ಳುತ್ತಾ ಪ್ರಗತಿಪರ ಕ್ರಿಯಾಶೀಲ ತರಬೇತಿ ನೀಡಬೇಕು.

ಆಕರ್ಷ ವಿಧಾನ ತಂತ್ರಗಳನ್ನು ಬಳಸಿ ಮಕ್ಕಳಲ್ಲಿ ಪ್ರೀತಿ, ವಿಶ್ವಾಸ ಮೂಡಿಸುತ್ತಾ ಅವರನ್ನು ಮುನ್ನಡೆಸುತ್ತಾ ಜವಾಬ್ದಾರಿಯನ್ನಾಗಿ ಮಾಡಬೇಕು.

**ಅಷ್ಟಕ ಪದ್ಧತಿಯಲ್ಲಿ ಕಿರಿಯ ನಾಯಕರ ಪಾತ್ರ:**

ಕಿರಿಯ ನಾಯಕರು ಸದಸ್ಯರಿಗಿಂತ ಹೆಚ್ಚು ಕಲಿತಿರಬೇಕು.

ಅಷ್ಟಕದ ವಿಶ್ವಾಸಗಳಿಸಬೇಕು, ಸ್ಫೂರ್ತಿ ತುಂಬಬೇಕು. ಸಂತಸದಿಂದ ಒಟ್ಟಾಗಿ ಕೆಲಸ ಮಾಡಬೇಕು.

ಅಧಿಕಾರ ಚಲಾಯಿಸುವ ನಾಯಕರಾಗಿರಬಾರದು. ಎಲ್ಲರ ಅಭಿಪ್ರಾಯವನ್ನು ಗೌರವಿಸಬೇಕು. ಜವಾಬ್ದಾರಿಯುತವಾಗಿ ವರ್ತಿಸಬೇಕು.

ಕಲಿಸುವುದನ್ನು ಸರಿಯಾಗಿ ಕಲಿಸಬೇಕು. ಅನುಮಾನವಿದ್ದರೆ ಹಿರಿಯ ನಾಯಕರಿಂದ ಪರಿಹರಿಸಿಕೊಳ್ಳಬೇಕು.

ತಮ್ಮ ಅಷ್ಟಕದ ಒಳ್ಳೆಯ ಕೆಲಸವನ್ನು ಮೆಚ್ಚಬೇಕು. ಹಿರಿಯ ನಾಯಕರ ಗಮನಕ್ಕೆ ತರಬೇಕು.

ಸವಾಲೆದುರಿಸುವ ಮನೋಭಾವ ಸಮಸ್ಯೆಗಳನ್ನು ಪರಿಹರಿಸುವ ಜಾಣ್ಮೆ ಬೆಳೆಸಿಕೊಳ್ಳಬೇಕು.

ತನ್ನ ಅಷ್ಟಕದ ಬಗ್ಗೆ ಕಾಳಜಿ ಇರಬೇಕು. ಯಾವಾಗಲೂ ಮೊದಲಿಗರಾಗಲು ಪ್ರಯತ್ನಿಸಬೇಕು.

ಬಿ.ಪಿ.ಯವರು "ಯಾವಾಗಲೂ ಮೊದಲು, ಎರಡನೆಯವರಾಗಬಾರದು" ಎನ್ನುತ್ತಿದ್ದರು. ಅಂತೆಯೇ ತಮ್ಮನ್ನು ಮತ್ತು ತಮ್ಮ ಸೈನ್ಯದ ತುಕಡಿಯನ್ನು ಮುನ್ನಡೆಸುತ್ತಿದ್ದರು.

ಅಷ್ಟಕ ಪದ್ಧತಿ ಅಳವಡಿಸಿ ಯಶಸ್ವಿ ಸ್ಕೌಟಿಂಗ್ ಗೈಡಿಂಗ್ ಮಾಡಿ



**ಸ್ಕೌಟಿಂಗ್ / ಗೈಡಿಂಗ್ : ಒಂದು ಆಟ, ಶಿಕ್ಷಣ ಮತ್ತು ಸಾಧನೆ**

**ಸ್ಕೌಟಿಂಗ್ / ಗೈಡಿಂಗ್ : ಬೇರೇನೂ ಅಲ್ಲ; ಒಂದು ಜೀವನ ವಿಧಾನ**

**ಸ್ಕೌಟಿಂಗ್ / ಗೈಡಿಂಗ್ : ಅದರ ಮಂತ್ರ ಸೇವೆ; ಸಹಬಾಳ್ವೆ;**

**ಸ್ಕೌಟಿಂಗ್ / ಗೈಡಿಂಗ್ : ಅದರ ವ್ಯಾಪ್ತಿ ಇಡೀ ಜಗತ್ತು**

**ಸ್ಕೌಟಿಂಗ್ / ಗೈಡಿಂಗ್ : ಆತ್ಮ ವಿಶ್ವಾಸ, ಸಾಹಸ ಮತ್ತು ಉಲ್ಲಾಸ;**

**ಸ್ಕೌಟಿಂಗ್ / ಗೈಡಿಂಗ್ : ಶಿಸ್ತು, ಸ್ವಾವಲಂಬನೆ ಮತ್ತು ದೈವಭಕ್ತಿ.**

# TUNGABHADRA BOARD

- SUSHMA JOSHI

"The Importance of the water in our life is like the importance of our heart beats.... Though they are not loud, they silently support our LIFE!".

The Tungabhadra Project - a multipurpose river valley project for sustainable development of water resources of the inter state river Tungabhadra. This project was taken up in the year 1945 and completed in 1953 at a cost of Rs. 130.76 crores. It consists of a medium sized Masonry dam of the straight gravity type, irrigation canal systems & hydro power houses constructed as a joint venture of the states - Karnataka & Andhra Pradesh.

The Tungabhadra Board was formed as per the Govt. of India notification dated 29th September, 1953 under Andhra State Act & reconstituted as per Govt. of India notification dated 10th March, 1955. This Board is headed by Chairman nominated by Govt. of India with member from both the States & a members from Govt. of India. A full time Secretary is stationed at Tungabhadra Dam for efficient performance of Board's functions.

The Board is responsible for distribution of water between the two States as per the stipulations in the award of Krishna Water Disputes Tribunal (KWDT).

**Hydro Electric Scheme :** It consists of three power houses : 1) at the foot of the Dam on the right bank with an installed capacity of 36 m.w.; 2) at the foot of the Dam on the left bank with an installed capacity of 27m.w. & 3) near Hampi at 22 k.m. of Power canal with an installed capacity of 36 m.w.

**Gardens :** The Board maintains a number of parks, gardens, woodlots, a deer park & an aviary near Dam which attract lakhs of tourists every year. Chakravana, Nandanavana, Children Park

are some of them. Apart from this the Garden unit is collecting various special of plants for the development of a Botanical Garden

**Fisheries :** The Tungabhadra reserviour with a water spread area of 378 sq.k.m. affords tremendous scope for development of fisheries. The Board established a major crop seed production farm in the year 1963. The Board also offers services for fisheries supplies ice for refrigeration, quality nylon twines & nets.

**Chaitanya :** Multimedia theatre named "Chaitanya" was Inaugurated on 13th August, 1999 with a seating capacity of 50, equipped with the state of art technology for creation of mass awareness.

**Parnaja :** An aquarium christined as "Parnaja" was built at a cost of Rs. 45 lakhs & inaugurated on 13th August, 1999. The aquarium with about 65 varieties of fishes provide a feast to the eyes & relaxation to the mind.

**"Loveless life is a fruitless tree! But fruitless life is a rootless tree! Tree can live without fruit but not without root..! Save Nature!**

**Musical Dancing Fountain:** A musical dancing fountain is provided in Dam Garden at a cost of Rs. 11.70 lakhs. Music, Light, and dancing water create an illusion of group dance to the delight of the children and elders alike!

**Budget & Sharing of Expenditure:** The budget is provided by the Govt. of Andhra Pradesh. & Karnataka both share the Expenditure with necessary adjustments done by the Accountant Generals of both the States.



*Every Scout, Guide knows that when your break up your camp there are two things you should leave behind you.*

*1) **Nothing** and 2) **Your thanks** to God for the Good Time you have had and to the owner of the land who has let you have use it.* ***-Baden Powel***

# ಪ್ಯಾಟ್ರೋಲ್ ಪದ್ಧತಿಯಲ್ಲಿ ಬಾಲಕ ನಾಯಕರು

- ಎನ್. ಶ್ರೀನಿವಾಸನ್, ಎಲ್.ಟಿ.(ಎಸ್.)
ಜಂಟಿ ರಾಜ್ಯ ಕಾರ್ಯದರ್ಶಿ (ಸ್ಕೌಟ್)
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

ಲಾರ್ಡ್ ಬೇಡನ್ ಪೋವೆಲ್‌ರು ಸ್ಕೌಟಿಂಗ್‌ನ ಮೂಲಕ ಪ್ಯಾಟ್ರೋಲ್ ಪದ್ಧತಿಯನ್ನು ಪರಿಚಯಿಸಿ ಒಂದು ಅದ್ಭುತವಾದ ಪವಾಡವನ್ನೇ ಮಾಡಿದ್ದಾರೆ. ಬೇರಾವುದೇ ಸಂಘ-ಸಂಸ್ಥೆಗಳಲ್ಲಿ, ಯುವ ಸಂಘಟನೆಗಳಲ್ಲಿ ಕಾಣಸಿಗದ, ಅಪೂರ್ವವಾದ, ಆದರೆ ಸ್ಕೌಟಿಂಗ್ ಕಾರ್ಯಕ್ರಮಕ್ಕೆ ವಿಶಿಷ್ಟವಾದ ಪದ್ಧತಿಯೇ ಪ್ಯಾಟ್ರೋಲ್ ಪದ್ಧತಿ. ಅಧಿಕಾರ ವಿಕೇಂದ್ರಿಕರಣದ, ಪ್ರಜಾಪ್ರಭುತ್ವದ ನೈಜ ಅನ್ವಯವೇ ಪ್ಯಾಟ್ರೋಲ್ ಪದ್ಧತಿಯಲ್ಲಿದೆ. ಅಷ್ಟೇ ಅಲ್ಲ, "ಸಣ್ಣ ಗುಂಪುಗಳಲ್ಲಿ ಕಲಿಯುವಿಕೆಯು ಪರಿಣಾಮಕಾರಿ ಯಾಗಿರುತ್ತದೆ" ಎಂಬ ಶೈಕ್ಷಣಿಕ ತತ್ತ್ವವನ್ನು ಸಾಬೀತು ಪಡಿಸುತ್ತದೆ. ಭಾವಿ ನಾಯಕರನ್ನು ರೂಪಿಸುವ, ತರಬೇತುಗೊಳಿಸುವ ಅವಕಾಶ ಇಲ್ಲಿದೆ.

ಇಲ್ಲಿ ನಾಲ್ಕು ಬಗೆಯ ನಾಯಕರನ್ನು ಗುರುತಿಸ ಬಹುದು.

1) ಪ್ಯಾಟ್ರೋಲ್ ನಾಯಕ

2) ಪ್ಯಾಟ್ರೋಲ್ ದ್ವಿತೀಯಕ

3) ತಂಡನಾಯಕ

4) ಸಹ ತಂಡನಾಯಕ

ಪ್ಯಾಟ್ರೋಲ್ ನಾಯಕನ ಗುಂಪು ಸಣ್ಣದು. ಆರರಿಂದ ಎಂಟು ಮಂದಿ ಸ್ಕೌಟುಗಳನ್ನು ಒಳಗೊಂಡ ಗುಂಪೇ ಇವನ ಪ್ಯಾಟ್ರೋಲ್. ಅದರ ಸದಸ್ಯರಿಗೆ ಮಾರ್ಗದರ್ಶನ ಮಾಡುವ, ಅವರ ಕಲಿಕೆಗೆ ಸಹಕರಿಸುವ ಜವಾಬ್ದಾರಿ ಈತನದು. ಹಾಗೆಯೇ ಪ್ಯಾಟ್ರೋಲ್‌ನ ಇತರ ಸದಸ್ಯರು ಇವನ ಸೂಚನೆಗೆ ಮತ್ತು ಆದೇಶಗಳಿಗೆ ಬದ್ಧರು. ಪ್ಯಾಟ್ರೋಲ್ ಸಲಹಾ ಸಭೆಯ ಅಧ್ಯಕ್ಷ ಈತನೆ. ಈ ಸಭೆಯಲ್ಲಿ ಪ್ಯಾಟ್ರೋಲ್‌ನ ಹಾಗೂ-ಹೋಗುಗಳ ಬಗ್ಗೆ, ಕಾರ್ಯಕ್ರಮಗಳ ಬಗ್ಗೆ ಎಲ್ಲ ಸದಸ್ಯರು ಸೇರಿ ಚರ್ಚಿಸಿ ತೀರ್ಮಾನ ಕೈಗೊಳ್ಳುತ್ತಾರೆ. ಈ ನಿಟ್ಟಿನಲ್ಲಿ ಪ್ಯಾಟ್ರೋಲ್ ನಾಯಕನ ಜವಾಬ್ದಾರಿ ಹೆಚ್ಚಿನದು. ಪ್ಯಾಟ್ರೋಲ್ ನಾಯಕನು ತನ್ನಷ್ಟಕ್ಕೆ ನಾಯಕನೆಂದು ಘೋಷಿಸಿಕೊಳ್ಳುವುದಿಲ್ಲ. ಪ್ಯಾಟ್ರೋಲ್‌ನ ಸದಸ್ಯರುಗಳು ತಮ್ಮ ನಾಯಕನನ್ನು ಆರಿಸಿಕೊಳ್ಳುವ ಹಕ್ಕನ್ನು ಹೊಂದಿರುತ್ತಾರೆ. ನಾಯಕನಾದರೋ ಕಾರ್ಯ ಹಂಚಿಕೆ ತತ್ತ್ವವನ್ನು ಆಧರಿಸಿ ಸದಸ್ಯರೆಲ್ಲರಿಗೂ ಅವನ ಸಾಮರ್ಥ್ಯಾನುಸಾರ ಕರ್ತವ್ಯಗಳನ್ನು ಹಂಚುತ್ತಾನೆ. ಹಾಗೂ ಮಾರ್ಗದರ್ಶನ ನೀಡುತ್ತಾನೆ.

ಪ್ಯಾಟ್ರೋಲ್ ದ್ವಿತೀಯಕನು ನಾಯಕನ ಅನುಪಸ್ಥಿತಿಯಲ್ಲಿ ಪ್ಯಾಟ್ರೋಲ್ ನಾಯಕನಷ್ಟೇ ಸಾಮರ್ಥ್ಯಶಾಲಿ ಯಾಗಿರಬೇಕು. ಪ್ಯಾಟ್ರೋಲ್‌ನ ಏಳು-ಬೀಳುಗಳಿಗೆ, ಸೋಲು-ಗೆಲುವುಗಳಿಗೆ ಈ ಇಬ್ಬರೂ ನಾಯಕರು ಜವಾಬ್ದಾರ ರಾಗಿರುತ್ತಾರೆ.

ನಾಯಕತ್ವದ ಗುಣಗಳನ್ನು ಅಭಿವೃದ್ಧಿಪಡಿಸಿ ಕೊಳ್ಳಲು ಇಲ್ಲಿ ವಿಪುಲವಾದ ಅವಕಾಶವಿದೆ. ಸೌಹಾರ್ದಯುತ ವಾತಾವರಣದಲ್ಲಿ ಸಹಬಾಳ್ವೆಯ ಪಾಠ ಇಲ್ಲಿ ಆಗುತ್ತದೆ. ಕೂಡಿ ಬಾಳಿದರೆ ವೈಯಕ್ತಿಕ ಬೆಳವಣಿಗೆ ಸಾಧ್ಯ ಎಂಬ ಸತ್ಯದ ಅರಿವಾಗುತ್ತದೆ. ಪ್ರತಿ ಪ್ಯಾಟ್ರೋಲಿಗೆ ತನ್ನದೇ ಆದ ಪ್ಯಾಟ್ರೋಲ್ ಧ್ವಜ, ಪ್ಯಾಟ್ರೋಲ್ ಧ್ಯೇಯ, ಪ್ಯಾಟ್ರೋಲ್ ಹಾಡು, ಪ್ಯಾಟ್ರೋಲ್ ಘೋಷಣೆ

ಮುಂತಾದವುಗಳು ಒಗ್ಗಟ್ಟಿನ ಭಾವನೆಯನ್ನು ಬೆಳೆಸುತ್ತದೆ. "ಪ್ಯಾಟ್ರೋಲ್‌ಗಾಗಿ ತಾನು, ತನಗಾಗಿಪ್ಯಾಟ್ರೋಲ್" ಎಂಬ ಪರಸ್ಪರ ಅವಲಂಬನೆಯ ಸೂತ್ರ ಇಲ್ಲಿ ಕಂಡುಬರುತ್ತದೆ. ಪ್ರತಿಯೊಂದು ಪ್ಯಾಟ್ರೋಲ್ ಸಹ ಒಂದು ಪ್ರಾಣಿ ಅಥವಾ ಪಕ್ಷಿಯ ಸಂಕೇತವನ್ನು ಹೊಂದಿರುತ್ತದೆ. ಆಯಾ ಪ್ರಾಣಿಯಲ್ಲಿರುವ ಅಥವಾ ಪಕ್ಷಿಯಲ್ಲಿರುವ ಉತ್ತಮ ಗುಣ ಅಥವಾ ಕುಶಲತೆಯನ್ನು ಸ್ಕೌಟುಗಳು ಬೆಳೆಸಿಕೊಳ್ಳಬೇಕೆಂಬುದೇ ಇದರ ಉದ್ದೇಶ. ಸಿಂಹದ ಗಾಂಭೀರ್ಯ, ಕಾಗೆಯ ಬಳಗ, ಪ್ರೀತಿ ಕಾಡು ಕೋಣದ ದೃಢಕಾಯ, ಆನೆಯ ಬಲ, ಗೀಜಗನ ಗೃಹರಚನಾ ಕೌಶಲ ಇತ್ಯಾದಿ.

ತಂಡ ನಾಯಕನ ಜವಾಬ್ದಾರಿ ಹೆಚ್ಚಿನದು. ನಾಲ್ಕು ಪ್ಯಾಟ್ರೋಲ್ ನಾಯಕರ ಪೈಕಿ ಒಬ್ಬನನ್ನು ತಂಡ ನಾಯಕನನ್ನಾಗಿ ಸ್ಕೌಟ್ ಮಾಸ್ತರರು ನೇಮಕ ಮಾಡುತ್ತಾರೆ. ನಾಲ್ಕು ಪ್ಯಾಟ್ರೋಲ್‌ಗಳು ಸೇರಿದ ಇಡೀ ತಂಡದ ಮುನ್ನಡೆಗೆ ಇವನದೇ ಜವಾಬ್ದಾರಿ. ಒಂದರ್ಥದಲ್ಲಿ ಇವನು ಪರ್ಯಾಯ ಸ್ಕೌಟ್ ಮಾಸ್ಟರ್ ಅವರ ಅನುಪಸ್ಥಿತಿಯಲ್ಲಿ ತಂಡದ ಕಾರ್ಯಕ್ರಮಗಳನ್ನು ಸುಲಲಿತವಾಗಿ ನಡೆಸುವ ಸಾಮರ್ಥ್ಯ ಈತನಿಗಿರಬೇಕು. 24 ರಿಂದ 32 ಮಂದಿ ಸದಸ್ಯರ ತಂಡದ ನಾಯಕನೀತ. ತಂಡದ ಬೇಕು ಬೇಡಗಳನ್ನು (ಸ್ಕೌಟಿಂಗ್‌ಗೆ ಸಂಬಂಧ ಪಟ್ಟಂತೆ ಮಾತ್ರ!!) ಸಮಸ್ಯೆಗಳನ್ನು ಯಥಾವತ್ತಾಗಿ ಹಾಗೂ ಸ್ಪಷ್ಟವಾಗಿ ಸ್ಕೌಟ್ ಮಾಸ್ಟರಿಗೆ ವರದಿ ಮಾಡುವ ಮತ್ತು ಚರ್ಚಿಸುವ ಸಾಮರ್ಥ್ಯ ಅವನಿಗಿರಬೇಕು. ಅದೇ ರೀತಿ ಸ್ಕೌಟ್ ಮಾಸ್ಟರ್‌ರ ಸೂಚನೆಗಳನ್ನು ಮತ್ತು ಆದೇಶಗಳನ್ನು ಯಥಾವತ್ತಾಗಿ ಪಾಲಿಸುವ ವಿಧೇಯತೆಯು ಅವನಿಗಿರಬೇಕು. ಯಾವ ತಂಡದಲ್ಲಿ ಸಮರ್ಥ ತಂಡನಾಯಕನಿರುತ್ತಾನೋ ಆ ತಂಡ ಯಶಸ್ಸನ್ನು ಕಾಣುತ್ತದೆ.

ಸಹ ತಂಡನಾಯಕನು ತಂಡನಾಯಕನು ಅನುಪಸ್ಥಿತಿಯಲ್ಲಿ ಅವನ ಕಾರ್ಯ ನಿರ್ವಹಿಸುತ್ತಾನೆ. ಅವನೂ ಸಹ, ತಂಡನಾಯಕನಷ್ಟೇ ಸಾಮರ್ಥ್ಯಶಾಲಿಯಾಗಿರಬೇಕು. ಇವನನ್ನು ಸಹ, ಪ್ಯಾಟ್ರೋಲ್ ನಾಯಕರ ಪೈಕಿ ಸ್ಕೌಟ್ ಮಾಸ್ಟರರು ನೇಮಕ ಮಾಡುತ್ತಾರೆ.

ಈ ಎಲ್ಲಾ ನಾಯಕರುಗಳೂ ಸೇರಿ ಮಹತ್ತರವಾದ ನಿರ್ಣಯಗಳನ್ನು ಕೈಗೊಳ್ಳುವ ಸಂದರ್ಭವೇ ಗೌರವ ನ್ಯಾಯಾಲಯ ಸಭೆ. ಅವರಲ್ಲಿ ಒಬ್ಬನು ಈ ಸಭೆಯ ಅಧ್ಯಕ್ಷನಾದರೆ ಮತ್ತೊಬ್ಬನು ಲಿಪಿಕಾರನಾಗಿರುತ್ತಾನೆ. ಈ ಸಭೆಯಲ್ಲಿ ಕೈಗೊಂಡ ನಿರ್ಣಯಗಳಿಗೆ ಸ್ಕೌಟ್ ಮಾಸ್ಟರ್ ಒಳಗೊಂಡಂತೆ ತಂಡದ ಎಲ್ಲರು ಬದ್ಧರು. ಇಡೀ ತಂಡದ ಹಣಕಾಸಿನ ವ್ಯವಹಾರಗಳು ಕಲಿಕೆಯ ವಿಷಯಗಳು, ಸದಸ್ಯರ ಅಶಿಸ್ತಿನ ಬಗ್ಗೆ ವಿವರಣೆ ಇವೆಲ್ಲವೂ ಈ ಸಭೆಯಲ್ಲಿ ಮುಕ್ತ-ಚರ್ಚೆಗೆ ಒಳಗಾಗುತ್ತವೆ. ಅಂತಿಮ ತೀರ್ಪು ಅವರದ್ದೇ. ಸ್ಕೌಟ್ ಮಾಸ್ಟರ್ ಕೇವಲ ಮಾರ್ಗದರ್ಶಕನಷ್ಟೇ. ಇದೊಂದು ಪ್ರಜಾಪ್ರಭುತ್ವದ ಶ್ರೇಷ್ಠ ಉದಾಹರಣೆ.

ಸ್ಕೌಟಿಂಗ್ ಸೇರಿದ ಒಬ್ಬ ಸಾಮಾನ್ಯ ಬಾಲಕ ಈ "ಪ್ಯಾಟ್ರೋಲ್ ಪದ್ಧತಿ" ಎಂಬ "ಕಾರ್ಯಾಗಾರ"ದಲ್ಲಿ ಪಕ್ವಗೊಂಡು, ಪ್ರಬುದ್ಧನಾಗಿ ಆತನ ದೈಹಿಕ, ಭೌತಿಕ, ಸಾಮಾಜಿಕ ಹಾಗು ಪಾರಮಾರ್ಥಿಕ ಪ್ರತಿಭೆಗಳನ್ನು ವಿಕಸನಗೊಂಡು, ಮುಂದೆ ಆತನು ರಾಷ್ಟ್ರದ ಜವಾಬ್ದಾರಿ ಯುತ ಪ್ರಜೆಯಾಗುತ್ತಾನೆ. ಇಂತಹ ಉತ್ತಮ ಪ್ಯಾಟ್ರೋಲ್ ಪದ್ಧತಿಯನ್ನು ಶತಪ್ರತಿ-ಶತ ತಮ್ಮ ತಂಡಗಳಲ್ಲಿ ಜಾರಿಗೊಳಿಸುವ ಜವಾಬ್ದಾರಿ ವಯಸ್ಕ ನಾಯಕರದ್ದು.



# INGREDIENTS OF PATROL SYSTEM

**- C.S. REDDY, L.T. (S.)**
Scribe H.W.B. Holders Re-union
National Awardee Teacher
National Silver Elephant Awardee Scouter

---

| | | |
|---|---|---|
| PATROL | : | Consists of 6 to 8 boys. It is a unit for purposes of work, games, discipline camp, competitions etc., under sa leader and a second to assist. |
| PATROL SYSTEM | : | That is, small permanent groups (Patrol) each under responsible charge of a leading boy (PL) for all activities. It is the only method of Scouting. |
| PATROL CORNER | : | It is ideal every patrol is provided a corner in the Scout room which they maintain, decorate and where they meet. |
| PATROL BOX | : | Contains complete patrol equipment. |
| PATROL FLAG | : | Each PL has a small flag on his staff with his patrol animals shown on it on both sides. measurement. |
| PATROL SIGN | : | Each Scout in the patrol has to be able to imitate the cry of his patrol animal. This is the sign by which scouts of a patrol can communicate with each other. When a Scout makes signs on the ground for others to read he also draws the head of the patrol-animal. |
| PATROL NAME | : | Each patrol is named after an animal or bird. It is a good plan to choose only animals and birds found in your District. |
| PATROL MOTTO | : | Each patrol chooses its own motto which generally applies in some way to the patrol animal. |
| PATROL CALL | : | This is the signal call of his patrol animal by which Scouts of a patrol can communicated with each other. |
| PATROL ANIMAL | : | Each patrol is named after an animal. Choose only the animal/ bird found in your district. |

PATROL CRY : Members of the patrol use patrol cries which is the cry of the animal or birds as given in Scouting for Boys.

PATROL SONG : Each patrol composes a song which highlights the qualities of the patrol animal or bird.

PATROL YELLS : Are developed to signify the patrol

PATROL STRIPES : Scouts wear shoulder stripes according to the name of the patrol which they belong. It consists of 2 bars each 5 cms. long and 1.5 cms wide based colour(s) in Scouting for Boys. It is stitched horizontally each 2 cms apart at the top of the left sleeve of the shirt immediately below the shoulder.

PATROL SECOND : Second is a boy selected by the PL to be his assistant and to take command of the patrol when he himself is away.

PATROL IN COUNCIL : Consists all its members with PL in the chair

TROOP LEADER : One of the PLs with not less than 6 months experince as a PL is appointed as a TL. He offers active assistance to the SM & ASMs and takes charge of the Unit in the absence of the Adult Unit Leader.

ASSISTANT TROOP LEADER : He assists the Troop Leader as directed.

PATROL LEADER : The Scout patrol is under the leadership of one of its own members, selected and appointed by the SM. When so appointed he is called Patrol Leader, He is responsible for the efficiency and smartness of his patrol.

COH : A Scout Troop is organised and run as a self governing institution. Its management is entrusted to a Court of Honour (COH) consisting of PLs, Troop Leader and Assistant Troop Leader. Deals with cases of discipline. question of awards. SM and ASM act as advisors.

PATROL FORMATION : While moving in the open the patrol usually moves in a formation which is in the shape of a kite formation with the PL in the centre. (Refer Scouting for Boys)

PATROL MEETING : An ultimate achievement of the Patrol System is for the patrols to hold their own regular meetings.

PATROL ACTIVITY/ ]
PRACTICES/ ]
PIONEERING/ ]
EXPEDITION/ ]
PROJECT/HUT ] Patrol Practices
PATROL CAMP/ ]
MEET ]
PATROL GOODTURN/ ]
PATROL HIKE/ ]

INSTRUCTIONAL PATROL : As a help to his leaders, the SM should form and run an instructional Patrol of which he is a Patrol leader and his ASM s, TL, PLs are members. It is an experimental patrol where ideas are tried - Troop's laboratory.

PATROL SPIRIT : Patrol spirit is that something which matters to every fellow in the Patrol. He feels proud that he belongs to its proud of everything the patrol has and makes his determination not to let the patrol down.

PATROL COMPETITIONS : An element of competition is evident and liked by Scouts/ Guides in learning and testing and this is done for all subjects.

*Courtesy :*
**Scouting for Boys**

# ಸ್ಕೌಟಿಂಗ್ – ಸಂದೇಶ

– ಎಂ. ಎಂ. ಲೋಂಡೆ ಎಲ್.ಟಿ. (ಸ್ಕೌಟ್ಸ್)
ಜಿಲ್ಲಾ ಮುಖ್ಯ ಆಯುಕ್ತರು, ಧಾರವಾಡ
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

**'ಸ್ಕೌಟಿಂಗ್'** ಇದು ಒಂದು ಮಹಾನ್ ಆಟವೆಂದು ಪರಿಗಣಿಸಲಾಗಿದೆ. ಇದರ ಸಂಸ್ಥಾಪಕ ಲಾರ್ಡ್ ಬೇಡನ್ ಪೋವೆಲ್ ಮಕ್ಕಳಿಗಾಗಿಯೇ ಇದನ್ನು ಸಂಘಟಿಸಿ ಇಡೀ ವಿಶ್ವಕ್ಕೆ ಒಂದು ಮುಖ್ಯ ಕಾಣಿಕೆಯುನ್ನು ನೀಡಿದ್ದಾರೆ. ಈ ಆಟದಲ್ಲಿ ಭಾಗವಹಿಸುವ ನಾವೆಲ್ಲರೂ ಅದೇ ಭಾವನೆಯಿಂದ ಆಸಕ್ತಿ ವಹಿಸಿ ಭಾಗವಹಿಸಬೇಕು ಮತ್ತು ಇದರ ಲಾಭ ಪಡೆದುಕೊಳ್ಳಬೇಕು.

'ಸ್ಕೌಟಿಂಗ್' ಮಕ್ಕಳ ಚಾರಿತ್ರ್ಯವನ್ನು ಬೆಳೆಸುತ್ತದೆ. ದೈಹಿಕ ಶಕ್ತಿಯನ್ನು ಹೆಚ್ಚಿಸಿ ಆರೋಗ್ಯವಂತ ವ್ಯಕ್ತಿತ್ವವನ್ನು ರೂಪಿಸುತ್ತದೆ. ಅವಶ್ಯಕವಾದ ಮತ್ತು ಉಪಯುಕ್ತವಾದ ನೈಪುಣ್ಯತೆಯನ್ನು ಕಲಿಸುತ್ತದೆ. ಸೇವಾ ಭಾವನೆಯನ್ನು ಹೆಚ್ಚಿಸಿ ನಾಗರಿಕತ್ವದ ಮೂಲ ಗುಣಗಳನ್ನು ಬೆಳೆಸುತ್ತದೆ. ಯಾವುದೇ ಕಾರ್ಯಕೈಕೊಳ್ಳು ಸಾಮರ್ಥ್ಯ ನೀಡುತ್ತದೆ. ಪರಸ್ಪರ ಸಹಕಾರ, ಸಹಾಯ, ಸಹಾನುಭೂತಿ, ಪರಸ್ಪರ ಪ್ರೀತಿ, ವಿಶ್ವಾಸ, ತಮ್ಮ ತಮ್ಮ ಧರ್ಮದ ಬಗೆಗೆ ಭಕ್ತಿ, ನಿಸರ್ಗ ಪ್ರೇಮ ಮೊದಲಾದವುಗಳನ್ನು ಬೆಳೆಸುತ್ತದೆ. ಕರ್ತವ್ಯ ಪಾಲನೆಯ ಅರಿವು ಮೂಡಿಸುತ್ತದೆ. ಆತ್ಮಗೌರವ, ಶಿಸ್ತು, ಸಂಯಮ, ವಿಧೇಯತೆ ಮತ್ತು ದೇಶಾಭಿಮಾನವನ್ನು ಹೆಚ್ಚಿಸುತ್ತದೆ. ಹೀಗೆ ಮಕ್ಕಳ ಜೀವನದಲ್ಲಿ ಸಂತಸದ ಸಮಯವನ್ನು ಹೆಚ್ಚಿಸುತ್ತದೆ.

ಕೊಲಂಬಿಯಾ ವಿಶ್ವವಿದ್ಯಾಲಯದ ಶಿಕ್ಷಣ ತಜ್ಞ ಡೀನ್ ರೂಸೆಲ್‌ರವರು ಸ್ಕೌಟಿಂಗ್ ನಿಕಟ ಸಂಪರ್ಕದಿಂದ ಪ್ರೇರಿತರಾಗಿ ಒಂದು ಅಧ್ಯಯನವನ್ನು ಕೈಕೊಂಡು ಸ್ಕೌಟಿಂಗ್‌ನಲ್ಲಿರುವ ಒಂದು ದೊಡ್ಡ ಮಾನವೀಯ ಮೌಲ್ಯವನ್ನು ಕಂಡು ಹಿಡಿದಿದ್ದಾರೆ. ಅವರ ಪ್ರಕಾರ ಮಕ್ಕಳ ಜೀವನದಲ್ಲಿ ಸ್ಕೌಟಿಂಗ್ ಅದ್ಭುತ ಮತ್ತು ಕ್ರಾಂತಿಕಾರಿ ಪರಿಣಾಮವನ್ನು ಬೀರಲ್ಲದು, ಇದರಲ್ಲಿರುವ ವಿವಿಧ ವಿಷಯ ಮತ್ತು ಚಟುವಟಿಕೆಗಳಿಗಿಂತ ಅವುಗಳನ್ನು ಕಾರ್ಯರೂಪಕ್ಕೆ ತರುವ ವಿಧಾನವನ್ನು ಹೆಚ್ಚು ಮೆಚ್ಚಿದ್ದಾರೆ. ಮಕ್ಕಳಿಗೆ ಆಟ ಬೇಕು, ಆಟವೇ ಪಾಠವಾಗಬೇಕು, ಆಟ ಪಾಠಗಳೆರಡೂ ಅವರ ವ್ಯಕ್ತಿತ್ವದ ವಿಕಸನಕ್ಕೆ ಮಾರ್ಗವಾಗಬೇಕು.

'ಮಾಡಿ ಕಲಿ' ಈ ಸಿದ್ಧಾಂತದಿಂದ ಅನೇಕ ಕ್ರಾಂತಿಕಾರಿ ಪರಿಣಾಮಗಳಾಗುವುವು. ಶಾಲೆಗಳಲ್ಲಿ ಶಾಲಾ ಕಾರ್ಯಕ್ರಮದಲ್ಲಿ ಮಕ್ಕಳಿಗೆ ಸಿಗದೇ ಇದ್ದ ಚಟುವಟಿಕೆಗಳನ್ನು ಸ್ಕೌಟಿಂಗ್‌ನಿಂದ ಕೊಡಬಹುದು. ಮಕ್ಕಳ ಮೇಲೆ ಜವಾಬ್ದಾರಿ ಹಾಕಿ ಅನೇಕ ಸಾಧನೆಗಳನ್ನು ಸಾಧಿಸಲು ಉತ್ತೇಜನ ಕೊಡಬಹುದು. ಸ್ಕೌಟಿಂಗ್ ಮಕ್ಕಳಿಗೆ ಇಷ್ಟವಿರುವಂತೆ ಬೇರೆ ಯಾವ ಸಂಘಟನೆಯಾಗಲೀ. ಯೋಜನೆಯಾಗಲೀ ಅಷ್ಟೊಂದು ಪರಿಣಾಮಬೀರಲಾರದು.

ಅಂತೆಯೇ ಲಾರ್ಡ್ ಬೇಡನ್ ಪೋವೆಲ್‌ರು 'ಸ್ಕೌಟಿಂಗ್ ಫಾರ್ ಬಾಯ್ಸ್' – ಮಕ್ಕಳಿಗೆ ಸ್ಕೌಟಿಂಗ್ ಎಂದು ಸಿದ್ಧಪಡಿಸಿದ ಈ ಮಹಾನ್ ಮತ್ತು ವಿಶಾಲ ಆಟವು ಇಂದು ವಿಶ್ವದಾದ್ಯಂತ ಎಲ್ಲ ದೇಶಗಳಲ್ಲಿ ಬೆಳೆಯುತ್ತಿದೆ. ಪ್ರಪಂಚದ ಅನೇಕ ರಾಷ್ಟ್ರಗಳು ತಮ್ಮ ಶೈಕ್ಷಣಿಕ ಯೋಜನೆಗಳಲ್ಲಿ ಇದಕ್ಕೆ ಮಹತ್ವದ ಸ್ಥಾನವನ್ನು

ನೀಡಿದ್ದಾರೆ. ಮಕ್ಕಳೇ ಅವರ ನಾಯಕರನ್ನು ಆಯ್ಕೆ ಮಾಡಿಕೊಂಡು ವಿವಿಧ ಚಟುವಟಿಕೆಗಳ ಜವಾಬ್ದಾರಿ ತೆಗೆದುಕೊಂಡು ತಮ್ಮ ತಮ್ಮ ಚಿಕ್ಕ ಗುಂಪುಗಳಲ್ಲಿ ಸಂಪೂರ್ಣ ತಲ್ಲೀನರಾಗಿ ಆತ್ಮ ಸಂಯಮ, ಶಿಸ್ತು, ಸಹಕಾರ, ಸ್ವಯಂ ನಿರ್ದೇಶನ ಹಾಗೂ ಸ್ವಯಂ ನಿರ್ಧಾರದಿಂದ ಮಹತ್ವದ ಕಾರ್ಯವನ್ನು ಸಾಧಿಸುತ್ತಾರೆ. "ಜೀವಿಸಲು ಗಳಿಸುವುದೆ ಹೇಗೆ" ಎನ್ನುವುದಕ್ಕಿಂತಲೂ "ಜೀವಿಸುವುದು ಹೇಗೆ" ಎಂಬುದರ ಅರಿವು ಮೂಡಿಸಿ ತಮ್ಮ ಜೀವನ ಎಷ್ಟು ಉತ್ತಮವಾಗಿ ರೂಪಿಸಿಕೊಳ್ಳ ಬೇಕೆಂಬುದನ್ನು ಸ್ಕೌಟಿಂಗ್‌ನಿಂದ ಕಲಿಯುತ್ತಾರೆ.

ಇಷ್ಟೆಲ್ಲಾ ಉತ್ತಮಾಂಶವನ್ನು ಕಲಿಸುವ ಸ್ಕೌಟಿಂಗ್ ಮಕ್ಕಳಿಗೆ ಆಕರ್ಷಣೀಯವಾದುದ್ದು. ಇಂದಿನ ಮಕ್ಕಳೇ ನಾಳಿನ ನಾಗರಿಕರು. ಮಕ್ಕಳು ತಮ್ಮ ಜೀವನದ ಶಿಲ್ಪಿಗಳು ತಾವೇ ಅಗಬೇಕೆಂದು ಆಶಿಸುವ ನಾವೆಲ್ಲರೂ ಮಕ್ಕಳಿಗೆ ಅವರ ಸ್ಕೌಟ್ ಮಾಸ್ಟರರ ಮಾರ್ಗದರ್ಶನ, ಸರಿಯಾದ ತರಬೇತಿ ಅತೀ ಅವಶ್ಯವಾಗಿದೆ ಎಂಬುದನ್ನು ಎಂದೂ ಮರೆಯಬಾರದು. ಮಕ್ಕಳಿಗೆ ಜವಾಬ್ದಾರಿ ವಹಿಸಿ, ವಯಸ್ಕರರ ಮಾರ್ಗದರ್ಶನದ ಅಡಿಯಲ್ಲಿ ಅದ್ಭುತ ಸಾಧನೆಯನ್ನು ಮಾಡಬಹುದು. ಮಕ್ಕಳಿಗೆ ಪ್ರೀತಿಯಿಂದ ಎಲ್ಲ ವಿಷಯಗಳನ್ನು ಚಟುವಟಿಕೆಗಳನ್ನು ಸರಿಯಾಗಿ ಕಲಿಸುತ್ತ, ಪ್ರಗತಿ ಪಥದಲ್ಲಿ ಸಾಗಲು ಕಲಿಸುವವರೇ ಸ್ಕೌಟ್ ಮಾಸ್ಟರರು. ಇವರು ಹೇಳಿದ ಪ್ರತಿಯೊಂದು ಮಾತು ಮಕ್ಕಳ ಮನಸ್ಸಿನ ಮೇಲೆ ಪರಿಣಾಮ ಬೀರುತ್ತದೆ. ಅವರು ಮಾಡಿದ ತಪ್ಪುಗಳನ್ನು ತಿದ್ದುವಲ್ಲಿ ಸ್ಕೌಟ್ ಮಾಸ್ಟರ್ ಕೈಕೊಂಡ ವಿಧಾನವು ಅವರ ಜೀವನದ ಗತಿಯನ್ನೇ ಬದಲಿಸುವುದು. ತಮ್ಮ ಸ್ಕೌಟ್ ಮಾಸ್ಟರರ ಮಾತು ಮಕ್ಕಳಿಗೆ ವೇದವಾಕ್ಯ. ಅದನ್ನು ಬದಲಿಸುವುದು ಅಸಾಧ್ಯ. ಅಂದ ಮೇಲೆ ಸ್ಕೌಟ್ ಮಾಸ್ಟರರ ಜವಾಬ್ದಾರಿ ಎಷ್ಟೊಂದು ಇದೆ ಎಂಬುದನ್ನು ನಾವು ಸ್ಪಷ್ಟವಾಗಿ ತಿಳಿದುಕೊಳ್ಳಬೇಕು.

ಇಂದಿನ ಸ್ಕೌಟುಗಳು ನಾಳಿನ ನಾಗರಿಕರು. ಉತ್ತಮ ರಾಷ್ಟ್ರಕ್ಕೆ ಉತ್ತಮ ನಾಗರಿಕರೇ ಬೇಕು. ಅಂತಹ ರಾಷ್ಟ್ರ ನಿರ್ಮಾಣದ ಕಾರ್ಯದಲ್ಲಿ ಸ್ಕೌಟ್ ಮಾಸ್ಟರರಿಗೂ ಮಹತ್ವದ ಪಾತ್ರ ಇದೆ ಎಂಬುದನ್ನು ಮರೆಯಕೂಡದು. ಮಕ್ಕಳಿಗೆ ಅವರ ಆದರ್ಶದಾಯಕ ಜೀವನವು ಒಂದು ಉದಾಹರಣೆಯಾಗುವುದು. ಮಕ್ಕಳೇ ನಮ್ಮ ನ್ಯಾಯಾಧೀಶರು ನಾವು ಮಾಡಿದ ಪ್ರತಿಯೊಂದು ತಪ್ಪು ಮಕ್ಕಳ ಮನಸ್ಸಿಗೆ ನೋವು ಉಂಟು ಮಾಡುವುದು. ಸ್ಕೌಟಿಂಗ್ ವಿಷಯ ಮತ್ತು ವಿಧಾನಗಳ ಬಗೆಗೆ ಎಚ್ಚರಿಕೆ ವಹಿಸಬೇಕು. ಸರಿಯಾಗಿ ವಿಷಯದ ಸಿದ್ಧತೆ ಮಾಡಿಕೊಂಡು ಹಸನ್ಮುಖರಾಗಿ ಯಾವಾಗಲೂ ಕ್ರಿಯಾಶೀಲರಾಗಿ ಮಕ್ಕಳನ್ನು ಸಂತೋಷಪಡಿಸುತ್ತಾ ಕಲಿಸಬೇಕು. ಸಂಸ್ಥಾಪಕ ಲಾರ್ಡ್ ಬೇಡನ್ ಪೋವೆಲ್‌ರ ಆದರ್ಶವನ್ನು ಮುಂದೆ ಇಟ್ಟುಕೊಂಡು ಮಕ್ಕಳಿಗೆ ತರಬೇತಿ ನೀಡಬೇಕು. ಹಾಗೆ ಮಾಡಿದರೆ ಮಾತ್ರ ಯಾವ ಉದ್ದೇಶಕ್ಕಾಗಿ ಸ್ಕೌಟಿಂಗ್ ಸ್ಥಾಪಿತವಾಗಿದೆಯೋ: ಆ ಉದ್ದೇಶವನ್ನು ನಾವೆಲ್ಲರೂ ಸಾಧಿಸಿದಂತಾಗುತ್ತದೆ ಮತ್ತು ಸ್ಕೌಟಿಂಗ್ ಕೊನೆಯ ವರೆಗೂ ಪ್ರಗತಿಯಾಗುತ್ತಾ ಸಾಗುತ್ತದೆ.

❁

**ನನಗೇನಾದರೂ ಒಂದು ಡಜನ್ ಮಕ್ಕಳಿದ್ದಿದ್ದರೆ ಅವರಲ್ಲಿ ಪ್ರತಿಯೊಬ್ಬನನ್ನೂ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಕಳುಹಿಸುತ್ತೇನೆ.**

**– ಡಾ॥ ಅನಿಬೆಸೆಂಟ್**

# Scout / Guide - A Worthy Citizen

**- Mohamed Wasil L.T. (S.)**
Headquarters Commissioner (Programme)
The Bharat Scouts & Guides, Karnataka

Scout/Guide movements prepare the boys and girls to become the worthy citizens of the country the founder Lord Baden Powell, in his book 'Scouting for Boys' says that scouting is citizenship training.

A boy aged ten plus joining Scout troop acquaints with the preliminaries of Scouting. prepares himself for the 'INVESTITURE' as a Scout.

The scout master arranges for the 'investiture ceremoney'. The parents and the office bearers of the troop are invited for the ceremony. In the "TROOP MEETING " in the presence of all the Scouts of the troop the Scout Master knowing the intention of the recruit Scout to become the member of the 'Scout Movement'. Asks the boy to repeat the Scout Promise. The boy repeats the Scout Promise. The Scout Master pins the 'Membership Badge' and the troop neck scarf is given to him. Thus the boy becomes a Member of the World Organization of Scout Movement. In the ceremony all importance is given to the boy. He is made to commit himself to the promise and law. He has promisd to live according to the promise and law.

**The Promise States**

"On my honor, I promise that I will do my best"

To day my duty to God and my country.

To help other people and

To obey the 'Scout Law'

**The Scout Law says :-**

A Scout is Trust worthy

A Scoutis loyal

A Scout is friend to all and a brother to every other scout.

A Scout is courteous

A Scout is a friend to animals and loves nature.

A Scout is disciplined and helps protect public property.

A Scout is courageous

A Scout is thrifty

A Scout is pure in thought, word and deed.

The values imbibed in promise and law lead the boy to do the right actions only. He has committed to it and will follow.

Now the boy joins his 'PATROL OF EIGHT SCOUTS' which is part of a 'TROOP' of thirty two scouts. In the patrol the other boys who are senior to him who have learnt already some skills,

train him. He learns every thing by 'learning by doing method'.

He is given training in every aspect of leading life like first aid, cooking / map reading, estimation, camp craft, find the way at the out of doors. Cooking etc. and he is exposed to proficiency badges which lure him to learn the things which are required to lead a happy life, through scout programme. He earns to his satisfaction the zillapuraskar, the Rajyapuraskar and the Rashtrapti puraskar, awards.

The Scout Master takes the boy to the camping life. here he is expose to the nature. Here he learns the ways and means to live in nature adjusting to the environment. Not only this, he has to adjust to the temperaments. attitudes, habits of his companions (members of his patrol). Here he realizes the greatness of God and adjusts to the vagaries of nature. learns good habits self help, cooking for self and others. His fear of loneliness and the darkness, disappears, Camp is the place where the the child is mould in character, habits, learns new things, thinks ahead, protecting himself, loving his fellowmen, practises obedience to his elders and praising almighty God.

He is given opportunities to attend the 'RALLY' at local level. 'CAMPOREE' at district level. 'JAMBORETTE' at state level and JAMBOREE at National and internation levels. These gatherings make him to meet people of different cultures. different traditions, different religions, different language, different habits.

He is given opportunities to attend camps at state level and national level, there by he travels and get the knowledge of the people, Geography, customs, different cultures of the country as well as the people of other State and Countries.

These gatherings create in him an awareness, which makes him to become an enlightened man. Now he is the citizen of the world. He is so busy in his scout activities that he has no time to think about evil things.

Now. he is the man looking ahead for making his life useful, not only to his country, but to the world at large he things good of the humanity. He has realized that he has to leave this world better than what he had found earlier.

He is an asset to the country as well as the world.

He takes initiative to elarn to act and to serve during his oldage also. he has kept up the promise of the 'Investiture'.

Like the boy the girl also becomes a world citizen through the guide activities.

In conclusion a 'Boy Scout'/s 'Girl Guide' will be the worthy citizens of the country as well as the world.



# Management & Leadership

**- M.A. CHELLLIAH**
Headquarters Commissioner (Publication)
The Bharat Scouts & Guides, Karnataka

Management has existed ever since man has been organised in to communities. It is some times thought to be an invention of the 20th Century but this is not so. Wherever and whenvere people worked together in groups to grow crops, to buy and sell, to wage war, to build a spiritual centre-there was a management.

**"Management is getting things done through people".**

This definition should not be read to mean only that someone (Administrator/Secretary) commands and other (working people) execute, although this happens in practice. Rather it should be interpreted to mean that working people is the most important means, or resource, for getting things done.

"Management is to make efficient use of resources and to get people to work harmoniously together in order to achieve objectives. People may be cooks, Teachers, Engineers, Nurses Doctors, Administrator, Secretaries and others but at some time during their work they are also managers.

However important manpower is, it is not the only resource that will need to be manged to achieve stated objectives and the reader will have no difficulty in naming the other resources.

A convenient trick for remembering types of resources is 3 Ms- Manpower, Materials, Money. Manpower has already been named. Another type is Materials, i.e., equipment and supplies used or consumed in anchieving objectives and the third resource is Money, without which the first two can not function.

There is another useful definition of management:

**Management is the Effieicnt use of Resources**

The general component of management is labour i.e., work must be shared by or divided among number of different categories- Skilled group, Technical Group and service Group for the Developmental activities and Service activities.

Management is a goal oriented and dynamic in function.

Management is an art as well as a Science.

**Management is a Group Activity:** Management is necessarily and important part of the Group activities. As no individual can satisfy all his desires himself, he associates himself with his fellow workers (individuals) and work in an organised group to achieve what he cannot achieve individually. This means Management is a "Co-operative Group". Management consists of getting things done through others.

Management needs Co-ordination: Co-ordination is defined as the orderly synchronisation of efforts of the People working in the organisation for the achievement of organisational objectives. Effective Leadership is the best technique of co-ordinations. It is the duty of the heads of the Organisation to co-ordinate the activites of individuals working under him through good leadership technique and Public Relations.

Decision Making : Decision making involves certain Commitment. Management Committed to every decision; it aims at the achievment of Organisational Objectives. Decision-making is a dynamic activity and not a Static entity.

Motivation : is general term applying to the entire class of drives, desires, needs, wishes and similar forces that induce an individual of group of work.

Negative Motivation : Bossism, punishment and rigid discipline are the negative and fearful motivation which is based on force and fear, Such motivation will result in fear, demotion work lay off, inefficiency and checks the work speed.

Morale : Morale is defined as "the degree of enthusiasm and willingness with which individual workers of a group set out to perform the assigned work with Zeal and Sincerity, resulting in good team work".

Management needs good leadership:

Democratic Leadership: Democratic or Participatory Ladership is a Leadership style where the Leaders involve followers to Plan and implement the decided task. The democratic leader accepts the positive suggestions of the followers for the betterment and development of the organisation.

To establish good Relationship, better Communication and to work with people cordially the adminstrators/ Secretaries may follow the followings:

Listen and understand - Discuss and Decide

Encourage to implement, Participate and appreciate.



## ಹಿರಿದು

ಹೆತ್ತು ಹೊತ್ತು ಸಾಕಿ ಸಲಹಿ
ತುತ್ತನುಣಿಸಿ ಮುತ್ತನೀಡಿ
ಪ್ರೀತಿ ಮಮತೆ ಕರುಣೆ ಕರೆವ
ಮೂರ್ತಿಯಾರದು?

'ಅಮ್ಮ' ನೆಂದು ಕರೆವ ದೈವ
ಜಗದಿ ಹಿರಿಯದು

ಹೆಗಲು ಎದೆಯ ಮೇಲೆ ಕುಣಿಸಿ
ತೊದಲು ನುಡಿಯ ತಿದ್ದಿ ಬೆಳೆಸಿ
ಹಗಲು ಇರುಳು ದುಡಿದು ಪೊರೆವ
ರಕ್ಷೆಯಾರದು?

'ಅಪ್ಪ' ನೆಂದು ಕರೆವ ದೈವ
ಜಗದಿ ಹಿರಿಯದು

ವಿದ್ಯೆ ಬುದ್ಧಿಗಳನು ಕಲಿಸಿ
ಸದ್ಗುಣಿಗಳ ಗಣಿಯಮಾಡಿ
ಸಜ್ಜನರನಾಗಿ ಕಡೆವ
ಶಿಲ್ಪಿಯಾರದು?

'ಗುರುವು' ಎಂದು ಕರೆವ ದೈವ
ಜಗದಿ ಹಿರಿಯದು

ಭೂಮಿ ಆಗಸಗಳ ರಚಿಸಿ
ಗಾಳಿ, ನೀರು ಪ್ರಕೃತಿ ಸೃಜಿಸಿ
ಬಾಳೆರೆಂದು ಹರಸಿ ಪೊರೆವ
ಶಕ್ತಿ ಯಾವುದು?

'ದೇವರೆ' ಎಂದು ಕರೆವ ದೈವ,
ಜಗದಿ ಹಿರಿಯದು

**– ಬೇಡರೆಡ್ಡಿಹಳ್ಳಿ ಪಂಪಣ್ಣ**

## ತಾಯಿ ದೇವರು

ದೇವರು ಎಂದರೆ ಎಲ್ಲಿಹನಮ್ಮ
ಕಾಣನು ಕಣ್ಣಿಗೆ ಏಕಮ್ಮ?
ಪ್ರತಿದಿನ ನೀನೇ ಪೂಜಿಸಿ ನಮಿಸುವ
ಮೂರ್ತಿಯೆ ದೇವರು ಏನಮ್ಮ?

ದೇವರು ಇಲ್ಲದ ಜಾಗವೆ ಇಲ್ಲ
ಕೇಳೋ ಕಂದ ಜಗದಲ್ಲಿ
ಕಲ್ಲಲಿ, ಹೂವಲಿ, ನೆಲಜಲ ಮುಗಿಲಲಿ
ಇರುವನು ನಾನಾ ರೂಪದಲಿ

ಬೇಡಿದುದೆಲ್ಲವ ಕೊಡುವವ ಅವನೇ
ಕಷ್ಟವು ಬಂದರೆ ಕಾಯುವನು
ಅವನನು ನಂಬಲು ಕಷ್ಟವು ದೂರವು
ಅವನೇ ಎಲ್ಲಕು ಕಾರಣನು

ಆದರೆ ಅಮ್ಮ, ಹೊಟ್ಟೆಯು ಹಸಿದರೆ
ಅನ್ನವ ಕೊಡುವಳು ನೀನಮ್ಮ
ಕೆಳಗಡೆ ಬಿದ್ದು ಅಳುತಿರೆ ನನ್ನನು
ಎತ್ತಿ ಮುದ್ದಿಸುವೆ ನೀನಮ್ಮ

ಕಣ್ಣಿಗೆ ಕಾಣದ ದೇವರಿಗಿಂತಲು
ಕಾಣುವ ದೇವರೆ ನೀನಮ್ಮ!
ನನ್ನನು ಸಾಕಿ ಸಲಹುವ ನೀನೇ
ದೇವರಿಗಿಂತಲು ಹೆಚ್ಚಮ್ಮ!

**– ಬೇಡರೆಡ್ಡಿಹಳ್ಳಿ ಪಂಪಣ್ಣ**
ಮಾಜಿ ಗೌರವ ಕಾರ್ಯದರ್ಶಿ
ಕೇಂದ್ರ ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು

# ನಾ ಕಂಡ ಕೆ.ಎಸ್. ವೀರಭದ್ರಪ್ಪ

– ಆರ್. ವೆಂಕಣ್ಣ
ಜಿಲ್ಲಾ ಮುಖ್ಯ ಆಯುಕ್ತರು, ಬಳ್ಳಾರಿ
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

ಶ್ರೀ ಕೆ.ಎಸ್. ವೀರಭದ್ರಪ್ಪನವರು 1970ರಲ್ಲಿ ಪರಿಚಯುವಾದರು. 1975ರಲ್ಲಿ ಶ್ರೀವಾನ್ ಘೋರ್‌ಪಡೆಯವರು ಆರ್ಥಿಕ ಮಂತ್ರಿಗಳಾಗಿದ್ದಾಗ ಕರ್ನಾಟಕ ರಾಜ್ಯದ ಸ್ಕೌಟ್–ಗೈಡ್ ಜಾಂಬೋರಿಯನ್ನು ಸಂಡೂರಿನಲ್ಲಿ ನಡೆಸಲು ತೀರ್ಮಾನಿಸಿದಾಗ ಶ್ರೀ ವೀರಭದ್ರಪ್ಪ ಅವರು ಹೆಗಲಿಗೆ ಹೆಗಲು ಕೊಟ್ಟು ರಾತ್ರಿ ಹಗಲು ಶ್ರಮಿಸಿ ಜಾಂಬೋರೇಟನ್ನು ಯಶಸ್ವಿಗೊಳಿಸಿದರು. ಆಗ್ಗೆ ಅವರು ತಾಲ್ಲೂಕು ಡೆವೆಲಪ್‌ಮೆಂಟ್ ಬೋರ್ಡ್, ಸೊಂಡೂರಿನಲ್ಲಿ ಅಧ್ಯಕ್ಷರಾಗಿ ಕೆಲಸ ನಿರ್ವಹಿಸುತ್ತಿದ್ದರು ಕೆ.ಎಸ್. ವೀರಭದ್ರಪ್ಪ.

ಇವರು ಸಾಮಾನ್ಯ ಕುಟುಂಬದಿಂದ ಬಂದಿದ್ದರು. ಅವರು ತಮ್ಮ ಶ್ರಮದಿಂದಲೇ ಬಹು ಎತ್ತರಕ್ಕೇರಿದರು. ಇವರು ಪಟ್ಟಣ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ, ಕೋ–ಆಪರೇಟೀವ್ ಸೊಸೈಟಿಯಲ್ಲಿ ಬಹುಕಾಲ ಕೆಲಸ ನಿರ್ವಹಿಸಿ ಉತ್ತಮ ವ್ಯಕ್ತಿಯಾಗಿ ಜನರ ಪ್ರೀತಿಗಳಿಸಿದರು. ಇವರು ಲ್ಯಾಂಡ್ ಟ್ರಿಬುನಲ್, ಜಿಲ್ಲಾ ಅಭಿವೃದ್ಧಿ ಸಮಿತಿ ಅಲ್ಲದೆ ನಿರ್ದೇಶಕರು, ಬಿ.ಡಿ.ಸಿ.ಸಿ. ಬ್ಯಾಂಕ್‌ನಲ್ಲಿ ಕೆಲಸ ನಿರ್ವಹಿಸಿದರು.

ಇವರು 1976ರಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಅಧ್ಯಕ್ಷರಾಗಿ 1988ರ ವರೆಗೆ ಕೆಲಸ ನಿರ್ವಹಿಸಿದರು.

1977ರಲ್ಲಿ ಲೋಕಸಭಾ ಸದಸ್ಯರಾಗಿ ಹೆಚ್ಚು ಮತಗಳಿಂದ ಆಯ್ಕೆಯಾದರು. ಇವರು ತಮ್ಮ ರಾಜಕೀಯ ಜೀವನದಲ್ಲಿ ಅತ್ಯುತ್ತಮ ಸೇವೆಸಲ್ಲಿಸಿ, ಜನರಿಗೆ ಸಾಕಷ್ಟು ಸಹಾಯ ಮಾಡಿದರು. ಇವರ ರಾಜಕೀಯ ಜೀವನದಲ್ಲಿ ಏರಿಳಿತಗಳು ಕಂಡರೂ ಧೃತಿಗೆಡದೆ ತಮ್ಮನ್ನು ಸಮಾಜಸೇವೆಯಲ್ಲಿ ತೊಡಗಿಸಿಕೊಂಡರು.

ಕೆ.ಎಸ್. ವೀರಭದ್ರಪ್ಪ ಅವರನ್ನು ಅಕ್ಟೋಬರ್ 2007ರಲ್ಲಿ ಕಂಡಾಗ ಅವರು ಅಸ್ವಸ್ಥರಾಗಿದ್ದುದು ಕಂಡುಬಂದಿತು. ಆಗ, ಪರಮಾತ್ಮ ಅವರಿಗೆ ಹೆಚ್ಚು ಆಯುರಾರೋಗ್ಯ ಕೊಟ್ಟು ಬಹುಕಾಲ ಬಾಳಿಸಲಿ ಎಂದು ಪ್ರಾರ್ಥಿಸಿ ಬಂದೆ. ಆದರೆ ವಿಧಿವಶಾತ್ ಅವರು 18–12–2007ರಂದು ಇಹಲೋಕ ತ್ಯಜಿಸಿದರು. ಆಗ ನಾನು ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದರಿಂದ ಅವರ ಕೊನೆಗಳಿಗೆಯಲ್ಲಿ ಅವರನ್ನು ಭೇಟಿ ಆಗಲಿಲ್ಲ.

ಇವರ ಸ್ಕೌಟಿಂಗ್ ಸೇವೆ ಚಿರಸ್ಮರಣೀಯ, ಇವರ ಆತ್ಮಕ್ಕೆ ಶಾಂತಿಸಿಗಲೆಂದು ಪರಮಾತ್ಮನಲ್ಲಿ ಅರಿಕೆ ಮಾಡಿಕೊಳ್ಳುತ್ತೇನೆ

❁❁❁

20ನೇ ಶತಮಾನದ ಶಿಕ್ಷಣ ಕ್ಷೇತ್ರಕ್ಕೆ ಅತ್ಯಂತ ಮಹತ್ವದ ಕೊಡುಗೆ ಬಂದಿರುವುದು ಶಿಕ್ಷಣ ತಜ್ಞರಿಂದಲ್ಲ; ಸ್ಕೌಟ್ ಚಳವಳಿಯನ್ನು ಸ್ಥಾಪಿಸಿದ ಸಿಪಾಯಿಯಿಂದ.

– ಜಾರ್ಜ್ ಬರ್ನಾರ್ಡ್ ಷಾ

ಭಾರತದ ಪ್ರತಿಯೊಂದು ಮನೆಯಲ್ಲೂ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಂತಹ ಮಕ್ಕಳಿರಬೇಕೆಂದು ನಾನು ಅಪೇಕ್ಷಿಸುತ್ತೇನೆ.

– ಮಹಾತ್ಮಾ ಗಾಂಧಿ

# ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆ, ಬಳ್ಳಾರಿ ರಾಜ್ಯಮಟ್ಟದ ಪೆಟ್ರೋಲ್ ನಾಯಕರ ಜಾಂಬೊರೇಟ್ ದಿನಾಂಕ 24-01-2009 ರಿಂದ 27-01-2009 ರ ವರೆಗೆ

– ಆರ್. ವೆಂಕಣ್ಣ
ಜಿಲ್ಲಾ ಮುಖ್ಯ ಆಯುಕ್ತರು, ಬಳ್ಳಾರಿ
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

---

ರಾಜ್ಯಮಟ್ಟದ ಪೆಟ್ರೋಲ್ ನಾಯಕರ ಜಾಂಬೊರೇಟ್ ದಿನಾಂಕ 24-01-09 ರಿಂದ 27-01-09 ತುಂಗಭದ್ರ ಅಣೆಕಟ್ಟು, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆಯಲ್ಲಿ ವಿಜೃಂಭಣೆಯಿಂದ ನಡೆಯಿತು. ದಿನಾಂಕ 24-01-09 ರಂದು ಮಾನ್ಯ ಶ್ರಿ ಬಿ. ಶಿವಪ್ಪ ಜಿಲ್ಲಾಧಿಕಾರಿಗಳು, ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ಹೆಚ್. ಬಾಲ್‌ರಾಜ್; ಉಪನಿರ್ದೇಶಕರು, ಬಳ್ಳಾರಿ, ಇವರು ಹಾಜರಿದ್ದರು. ಇವರ ಸಮ್ಮುಖದಲ್ಲಿ ಶ್ರೀ ಬಿ. ಶಿವಪ್ಪ, ಜಿಲ್ಲಾಧಿಕಾರಿಗಳು ಜಾಂಬೊರೇಟ್‌ನ್ನು ಉದ್ಘಾಟಿಸಿದರು. ಈ ಸ್ಕೌಟ್/ಗೈಡ್ ಚಳವಳಿ ಬಳ್ಳಾರಿ ಜಿಲ್ಲೆಯಲ್ಲಿ ಅಭಿವೃದ್ಧಿಯಾಗಲು ಎಲ್ಲ ಸಹಾಯ-ಸಹಕಾರ ಹಾಗೂ ನೆರವು ನೀಡುವುದಾಗಿ ತಿಳಿಸಿದರು. ಶ್ರೀ ಹೆಚ್. ಬಾಲ್‌ರಾಜ್ ಉಪನಿರ್ದೇಶಕರು, ಬಳ್ಳಾರಿ ಇವರು ಜಿಲ್ಲೆಯ ಪ್ರತಿಯೊಂದು ಶಾಲೆಯಲ್ಲಿ ಸ್ಕೌಟ್/ಗೈಡ್ ದಳಗಳ ಘಟಕಗಳನ್ನು ಪ್ರಾರಂಭಿಸಲು ಶಿಕ್ಷಕ/ಶಿಕ್ಷಕಿಯರನ್ನು ನಿಯೋಜಿಸುವುದಾಗಿ ತಿಳಿಸಿದರು. ಶ್ರೀ ಕೊಂಡಜ್ಜಿ, ಬಿ. ಷಣ್ಮುಖಪ್ಪ ಇವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಜಿಲ್ಲೆಗೆ ತರಬೇತಿ ಶಿಬಿರಕ್ಕಾಗಿ ಭೂಮಿ ಹಾಗೂ ಅದನ್ನು ಅಭಿವೃದ್ಧಿಪಡಿಸಲು ಧನ ಸಹಾಯ ಮಾಡಬೇಕೆಂದು ಅಧಿಕಾರಿಗಳನ್ನು ಕೋರಿದರು. ಇದೇ ಸಂದರ್ಭದಲ್ಲಿ ಭಾರತ್ ಸ್ಕೌಟ್ಸ್ /ಗೈಡ್ಸ್, ಬಳ್ಳಾರಿ ಜಿಲ್ಲಾ ಸಂಸ್ಥೆಯವರು ಹೊರತಂದಿರುವ 'ಬಿರಿಮುಗುಳು' ಎಂಬ ಸ್ಮರಣ ಸಂಚಿಕೆಯನ್ನು ಜಿಲ್ಲಾಧಿಕಾರಿಗಳು ಬಿಡುಗಡೆಗೊಳಿಸಿದರು.

ದಿನಾಂಕ 25-01-2009 ರಂದು ಉಪಹಾರದ ನಂತರ ಬಳ್ಳಾರಿ ಜಿಲ್ಲಾ ಸಂಸ್ಥೆಯವರು ಏರ್ಪಡಿಸಿದ್ದ ಬಸ್ಸುಗಳಲ್ಲಿ ಸ್ಕೌಟ್ಸ್/ಗೈಡ್ಸ್‌ಗಳು ಹಂಪಿ ಪ್ರವಾಸ ಕೈಗೊಂಡು ಹಂಪೆಯ ವಿರೂಪಾಕ್ಷ ದೇವಾಲಯ, ಲೋಟಸ್ ಮಹಲ್, ಮಹಾನವಮಿ ದಿಬ್ಬ, ಉಗ್ರನರಸಿಂಹ, ಸಾಸಿವೆ ಮತ್ತು ಕಡಲೆ ಗಣಪತಿ ವಿಗ್ರಹಗಳು, ವಿಜಯವಿಠಲ ದೇವಾಲಯ ಇನ್ನೂ ಮುಂತಾದ ದೇವಾಲಯಗಳನ್ನು ವೀಕ್ಷಿಸಿ ಮರಳಿ ಶಿಬಿರಕ್ಕೆ ಬಂದು ನಂತರ ತುಂಗಭದ್ರಾ ಡ್ಯಾಂ ಮತ್ತು ಉದ್ಯಾನವನಗಳನ್ನು ವೀಕ್ಷಿಸಿ ಸಾಯಂಕಾಲ ಮ್ಯೂಸಿಕ್ ಫೌಂಟೆನ್ ನೋಡಿಕೊಂಡು ಸ್ಕೌಟ್ಸ್/ಗೈಡ್ಸ್‌ಗಳನ್ನು ಶಿಬಿರಕ್ಕೆ ಕರೆತರಲಾಯಿತು. ರಾತ್ರಿ ಶಿಬಿರಾಗ್ನಿಯ ನಂತರ ಸ್ಕೌಟ್ಸ್/ಗೈಡ್ಸ್‌ಗಳು ವಿಶ್ರಾಂತಿ ಪಡೆದರು.

ದಿನಾಂಕ 26-01-2009 ರಂದು ಸ್ಕೌಟ್ಸ್/ಗೈಡ್ಸ್‌ಗಳನ್ನು ಗುಂಪುಗಳಾಗಿ ವಿಂಗಡಿಸಿ ಜಾನಪದ ನೃತ್ಯ, ಪೆಟ್ರೋಲ್ ನಾಯಕರ ಸಭೆ, ಪರಿಸರದ ಮೇಲೆ ಡ್ರಾಯಿಂಗ್, ಪೇಂಟಿಂಗ್, ರಾಷ್ಟ್ರೀಯ ಭಾವೈಕ್ಯತೆಯ ಬಗ್ಗೆ ಭಾಷಣ ಮೊದಲಾದ ಚಟುವಟಿಕೆಗಳನ್ನು ಏರ್ಪಡಿಸಲಾಗಿತ್ತು. ಈ ಚಟುವಟಿಕೆಗಳಲ್ಲಿ ಪ್ರಥಮ ಸ್ಥಾನ, ದ್ವಿತೀಯ ಸ್ಥಾನ ಗಳಿಸಿದ ಸ್ಕೌಟ್ಸ್/ಗೈಡ್ಸ್‌ಗಳಿಗೆ ಬಹುಮಾನಗಳನ್ನು ವಿತರಿಸಲಾಯಿತು. ಅದೇ ದಿನ ಸಾಯಂಕಾಲ ಭವ್ಯ ಶಿಬಿರಾಗ್ನಿ ಏರ್ಪಡಿಸಲಾಗಿತ್ತು.

ದಿನಾಂಕ 27-01-2009 ರಂದು ಸ್ಕೌಟ್ಸ್/ಗೈಡ್ಸ್‌ಗಳಿಗೆ ಸಾಹಸ ಚಟುವಟಿಕೆಗಳನ್ನು "ಸರ್ಕ್ಯೂಟ್" ಉದ್ಯಾನವನದಲ್ಲಿ ಏರ್ಪಡಿಸಲಾಗಿತ್ತು. ಮಕ್ಕಳು ಬಹು ಸಂತೋಷದಿಂದ ಎಲ್ಲ 12 ಚಟುವಟಿಕೆಗಳಲ್ಲಿ ಅಂದರೆ ಹಗ್ಗ ಏರುವುದು, ಇಳಿಯುವುದು, ಹಗ್ಗದ ಸೇತುವೆ ಮೇಲೆ ನಡೆಯುವುದು. ಮುಂತಾದ ಚಟುವಟಿಕೆಗಳಲ್ಲಿ

ಭಾಗವಹಿಸಿದರು.

ಸಂಜೆ 4-30 ಗಂಟೆಗೆ ಸರಿಯಾಗಿ ಸಮಾರೋಪ ಸಮಾರಂಭ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಈ ಸಮಾರಂಭಕ್ಕೆ ಶ್ರೀ ಎಲ್.ಎ.ವಿ. ನಾದನ್, ಕಾರ್ಯದರ್ಶಿ, ತುಂಗಭದ್ರಾ ಬೋರ್ಡ್, ಶ್ರೀ ಸುಭಿಮಲ್ ಘೋಸ್, ಜನರಲ್ ಮ್ಯಾನೇಜರ್, ಎನ್.ಎಂ.ಡಿ.ಸಿ. ದೋಣಿಮಲೈ ರವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಮುಖ್ಯ ಅತಿಥಿಗಳು ತಮ್ಮ ಭಾಷಣದಲ್ಲಿ ಸ್ಕೌಟ್ಸ್/ಗೈಡ್ಸ್ ಸಂಸ್ಥೆ ಅದರಲ್ಲೂ ಬಳ್ಳಾರಿ ಜಿಲ್ಲಾ ಸಂಸ್ಥೆ ಸ್ಕೌಟ್ಸ್/ಗೈಡ್ಸ್‌ಗಳ ಮನೋವಿಕಾಸ ಬೆಳೆಸಲು ಶ್ರಮಿಸುತ್ತಿರುವುದು ಶ್ಲಾಘನೀಯ ಈ ಸಂಸ್ಥೆಯ ಗುರಿ-ಧ್ಯೇಯ ಪ್ರತಿ ಮಗುವಿನಲ್ಲಿ ವೃದ್ಧಿಪಡಿಸಿದಾಗ ಭಾರತ ಭವ್ಯ ಭಾರತವಾಗಿ ಮುಂದೆ ಬರುವುದಲ್ಲಿ ಸಂಶಯವಿಲ್ಲ ಎಂದು ನುಡಿದರು. ಬಳ್ಳಾರಿ ಜಿಲ್ಲಾ ಸಂಸ್ಥೆಗೆ ಎಲ್ಲಾ ರೀತಿಯ ನೆರವು ಸಹಾಯ, ಸಹಕಾರ ಮುಂದೆ ಬರುವ ದಿನಗಳಲ್ಲಿ, ನೀಡುವುದಾಗಿ ಆಶ್ವಾಸನೆ ಕೊಟ್ಟರು. ಈ ಜಾಂಬೋರೇಟ್‌ಗೆ ಸಹಾಯ ಮಾಡಿದ ಎನ್.ಎಂ.ಡಿ.ಸಿ. ಸಂಸ್ಥೆ ಶ್ರೀನಿಕ್ ಬೆಳ್ಗೊಡ, ಕೆ.ಎಸ್. ವೀರಭದ್ರಪ್ಪ ಗಣಿಮಾಲಿಕರು ಸಂಡೂರು, ಶ್ರೀ ವೆಂಕಟರಾವ್ ಘೋರ್ಪಡೆ, ಸಂಡೂರು, ಜಿಲ್ಲಾಧಿಕಾರಿಗಳು, ಬಳ್ಳಾರಿ ಹಾಗೂ ಶ್ರೀಮತಿ ರೂಪಾ ಯುಲಾಡ್ ಗಣಿ ಮಾಲಿಕರು, ಸಂಡೂರು, ಹಾಗೂ ರಾಜ್ಯ ಸಂಸ್ಥೆ ಬೆಂಗಳೂರು, ಇವರ ಆರ್ಥಿಕ ನೆರವಿನಿಂದ ಜಾಂಬೋರೇಟ್ ಕಾರ್ಯಕ್ರಮವು ಯಶಸ್ವಿಯಾಗಿ ನಡೆಯಿತೆಂದು ತಿಳಿಸಲು ಹರ್ಷವಾಗುತ್ತದೆ.

ಈ ಜಾಂಬೋರೇಟ್‌ನಲ್ಲಿ ರಾಜ್ಯದ 18 ಜಿಲ್ಲೆಗಳಿಂದ 700 ಸ್ಕೌಟ್ಸ್/ಗೈಡ್ಸ್‌ಗಳು ಭಾಗವಹಿಸಿ ಬಳ್ಳಾರಿ ಜಿಲ್ಲೆಯ ಕಲೆ, ಜನರ ಆದರದ ಆತಿಥ್ಯ ಎಂದಿಗೂ ಮರೆಯಲಾರರೆಂದು ನಂಬಿದ್ದೇನೆ. ಮಕ್ಕಳು ತಮ್ಮ ಭಾಷಣದಲ್ಲಿ ಬಳ್ಳಾರಿ ಜಿಲ್ಲೆಯ ಜಾಂಬೋರೇಟ್ ಬಗ್ಗೆ ಅತೀವ ಸಂತಸ ವ್ಯಕ್ತಪಡಿಸಿದರು.

27-01-09 ರಂದು ಬೆಳಗ್ಗೆ ಸರ್ವಧರ್ಮ ಪ್ರಾರ್ಥನೆ ಏರ್ಪಡಿಸಲಾಗಿತ್ತು. ಶ್ರೀ ಆರ್. ವೆಂಕಣ್ಣ, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಎಂ.ಎ. ಶಕೀಬ್ ಜಿಲ್ಲಾ ಕಾರ್ಯದರ್ಶಿ ಹಾಗೂ ಎಲ್ಲಾ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳ ಶ್ರಮದಿಂದ ರಾಜ್ಯಮಟ್ಟದ ಪೆಟ್ರೋಲ್ ನಾಯಕರ ಜಾಂಬೋರೇಟ್ ಯಶಸ್ವಿಯಾಯಿತೆಂದು ತಿಳಿಸಲು ಹರ್ಷವಾಗುತ್ತದೆ.

ಈ ಜಾಂಬೋರೇಟ್‌ನಲ್ಲಿ ರಾಜ್ಯ ಗೈಡ್ ಆಯುಕ್ತರಾದ ಶ್ರೀಮತಿ ರವಿವೆಸ್ಲಿ, ರಾಜ್ಯ ಸಂಘಟನಾ ಗೈಡ್ ಆಯುಕ್ತಾದ ಶ್ರೀಮತಿ ಜಾನಕಿವೇಣು ಗೋಪಾಲ್, ಭಾಗವಹಿಸಿದರು. ಶ್ರೀಎಂ. ಪ್ರಭಾಕರ್‌ಭಟ್, ಎ.ಎಸ್.ಓ.ಸಿ.(ಎಸ್.) ಇವರ ಸ್ಕೌಟ್ ವಿಭಾಗದ ನಾಯಕರಾಗಿ, ಶ್ರೀಮತಿ ಪ್ರೇಮ ಮಂಗಳೂರು ಗೈಡ್ ವಿಭಾಗದ ನಾಯಕಿಯಾಗಿ ಕಾರ್ಯನಿರ್ವಹಿಸಿದರು. ಶ್ರೀ ಮಂಜುನಾಥಾಚಾರ್, ಎ.ಎಸ್.ಓ.ಸಿ ಶ್ರೀ ಎಸ್. ಓಮೇಶ್ವರಯ್ಯ ಡಿ.ಓ.ಸಿ., ದಾವಣಗೆರೆಯಿಂದ ಬಂದ ಶ್ರೀಮತಿ ಮಾಯಾ, ಗೈಡ್ ಕ್ಯಾಪ್ಟನ್, ಶ್ರೀ ಎಂ.ನಾಗರಾಜು, ಸ್ಕೌಟ್ ಮಾಸ್ಟರ್ ಶ್ರೀ ಚಂದ್ರಪ್ಪ, ಸ್ಕೌಮಾ. ಶ್ರೀಮತಿ ಜಯಶ್ರೀ ಜೋಶಿ, ಫ್ಲಾಕ್ ಲೀಡರ್ ಶ್ರೀ ದೊಡ್ಡನಗೌಡ, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶಿರಗುಪ್ಪ, ಶ್ರೀ ಎ. ಕೊಟ್ರೇಶ್ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಕೂಡ್ಲಿಗಿ, ಶ್ರೀ ಮೆಹಬೂಬ ಭಾಷ, ಜಿಲ್ಲಾ ಸಂಘಟಕರು, ಬಳ್ಳಾರಿ, ಶ್ರೀಮತಿ ರೇವತಿ, ಎಲ್.ಟಿ.(ಬು.), ಶ್ರೀ ಸೋಮಪ್ಪ, ಕಾರ್ಯದರ್ಶಿ ಸಂಡೂರು, ಶ್ರಿ ಕೊಟ್ರಗೌಡ ಪಾಟೀಲ್, ಹಗರಿ ಬೊಮ್ಮನಹಳ್ಳಿ ಇವರು ನಾಯಕರುಗಳಿಗೆ ಸಹಾಯಕರಾಗಿ ಕಾರ್ಯ ನಿರ್ವಹಿಸಿ ಜಾಂಬೋರೇಟ್‌ನನ್ನು ಯಶಸ್ವಿಗೊಳಿಸಿದರು. ಅಲ್ಲದೆ ಹಾಸನ ಜಿಲ್ಲಾ ಕಾರ್ಯದರ್ಶಿ ಶ್ರೀ ಪ್ರಕಾಶ್, ಸಹಾಯ ಮಾಡಿದರು.

ಶ್ರೀ ಎಂ.ಎ. ಚೆಲ್ಲಯ್ಯ, ರಾಜ್ಯ ಸ್ಥಾನಿಕ ಆಯುಕ್ತರು ಇವರ ಮಾರ್ಗದರ್ಶನದಲ್ಲಿ ಈ ಜಾಂಬೋರೇಟ್ ಯಶಸ್ವಿಯಾಯಿತೆಂದು ತಿಳಿಸಲು ಹರ್ಷವಾಗುತ್ತದೆ.

ಸಾಯಂಕಾಲ 6 ಗಂಟೆಗೆ ಜಾಂಬೋರೇಟ್ ಮುಕ್ತಾಯವಾಯಿತು.



## *A View of the State Level Patrol Leaders Jamborette from 24th to 27th Jan, 2009 held at T.B. Dam, Hospet, Bellary Dist.*







Sri Kondajji B. Shanmukhappa, State Chief Commissioner, Lighting the Lamp.
Sri B. Shivappa, I.A.S., Deputy Commissioner, Bellary, releasing the Souvenir
Dr. H. Balaraj, Deputy Director of Public Instruction, Miss Ravi Wesley, State Commissioner (G)
Sri R. Venkanna, DCC, Dr. Tekur Ramanath, DC(S), Sri L.D. Joshi, BEO, Sri M.A. Chellaiah, HQC (P) are also seen.

## *Visit to Historical Places at Hampi*



















*Sri Subhimal Bose*

General Manager, NMDC, Donimalai

*and*

*Sri L.A.V. Nathan*

Secretary, T.B. Board, Hospet

*delivered the valedictory address*








*With Best Compliments from*



# ದಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ,
## ಜಿಲ್ಲಾ ಸಂಸ್ಥೆ, ದಾವಣಗೆರೆ.

ಧರ್ಮರತ್ನಾಕರ ರಾಜನಹಳ್ಳಿ ಮದ್ದೂರಾಯಪ್ಪ ಸ್ಕೌಟ್ ಭವನ,
1ನೇ ಮುಖ್ಯ ರಸ್ತೆ, ಪಿ.ಜೆ. ಬಡವಾಣೆ, ದಾವಣಗೆರೆ–577 002

ಪೆಟ್ರೋಲ್ ಲೀಡರ್ಸ್ ಜಾಂಬೋರೇಟ್ ಯಶಸ್ವಿಯಾಗಲೆಂದು ಹಾರೈಸುತ್ತೇವೆ

ಶ್ರೀ ಅಥಣಿ ಕೊಟ್ರೇಶ್, ಅಧ್ಯಕ್ಷರು, ಜಿಲ್ಲಾ ಸಂಸ್ಥೆ, ದಾವಣಗೆರೆ

ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ, ಜಿಲ್ಲಾ ಮುಖ್ಯ ಆಯುಕ್ತರು, ದಾವಣಗೆರೆ

ಶ್ರೀ ಮಹಮ್ಮದ್ ವಾಸಿಲ್, ಉಪಾಧ್ಯಕ್ಷರು, ಜಿಲ್ಲಾ ಸಂಸ್ಥೆ, ದಾವಣಗೆರೆ

ಶ್ರೀ ಎ.ಪಿ ಷಡಾಕ್ಷರಪ್ಪ, ಜಿಲ್ಲಾ ಸ್ಕೌಟ್ ಆಯುಕ್ತರು, ದಾವಣಗೆರೆ

ಶ್ರೀಮತಿ ಪುಟ್ಟಮ್ಮ ಮಹಾರುದ್ರಯ್ಯ , ಜಿಲ್ಲಾ ಗೈಡ್ ಆಯುಕ್ತರು, ದಾವಣಗೆರೆ

ಶ್ರೀ ಬಾದಾಮಿ ರುದ್ರೇಶ್, ಖಜಾಂಚಿಗಳು, ದಾವಣಗೆರೆ

ಶ್ರೀ ಎ. ಶಿವಪ್ಪ, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್) ದಾವಣಗೆರೆ

ಶ್ರೀಮತಿ ಎಸ್. ಸಿದ್ಧಮ್ಮ, ಜಿಲ್ಲಾ ತರಬೇತಿ ಆಯುಕ್ತರು (ಗೈಡ್ಸ್) ದಾವಣಗೆರೆ

ಶ್ರೀ ಎಸ್. ಶಂಕರ್ ನಾಯ್ಕ್, ಜಿಲ್ಲಾ ಕಾರ್ಯದರ್ಶಿಗಳು, ದಾವಣಗೆರೆ

## Through a message of Love & Peace

**Our Movement embodies a message of peace for young people and adults all over the World. We believe in the power of love to bring about change and we extend this love to everyone regardless of their colour, language, creed, background or political views.**

**Peace is built by the benevolent and altruistic, those who are capable of putting their own life to the service of others. They unite their efforts as part of a mission in which everyone has a part of a mission in which everyone has a part of play. Peace is the synthesis of individual actions and an on-going challenge for us all.**

***- M.A. Chellaiah***

## Through a message of Love & Peace

**Our Movement embodies a message of peace for young people and adults all over the World. We believe in the power of love to bring about change and we extend this love to everyone regardless of their colour, language, creed, background or political views.**

**Peace is built by the benevolent and altruistic, those who are capable of putting their own life to the service of others. They unite their efforts as part of a mission in which everyone has a part of a mission in which everyone has a part of play. Peace is the synthesis of individual actions and an on-going challenge for us all.**

***- M.A. Chellaiah***

*With Best Compliments from*

# ಶ ಬ ರಿ





ನಮಸ್ಕಾರ ರೀ

ಮಾತಾಡ್ರಿ ಕನ್ನಡಾನಾ ರೀ

ಓದ್ತಾ ಇರಿ ಕನ್ನಡ ಪುಸ್ತಕಾ ರೀ

ಬರಿತಾ ಇರಿ ಕನ್ನಡ ಅಕ್ಷರಾನಾ ರೀ

ಬರ್ತಾ ಇರಿ ನಮ್ಮ ಉಪಹಾರ ಗೃಹ

## 'ಶಬರೀ' ರಿ

ಶುಚಿ ರುಚಿ ಇರುವ ತಿನಿಸು ನಮ್ಮಲ್ಲಿದೇರಿ

ತಾಜಾ ಸುದ್ದಿಗೆ ದಿನಪತ್ರಿಕೆ ರೀ

ತಾಜಾ ಉಪಹಾರಕ್ಕೆ ನಮ್ಮ 'ಶಬರೀ' ರಿ

ನಾವ್ ನಮ್ದು ಅಂತ ಹೇಳ್ತಾ ಇಲ್ಲರೀ

ನೀವ್ ನಮ್ಮವರು ಇದು ನಿಮ್ದು ಅಂತಾರಿ

ಸದಾ ಬಂದು ಹೋಗ್ತಾ ಬರೋದೈತ್ರೀ

ನೀವ್ ಬರ್ತಾ ಇರ್‌ಬೇಕ್ರಿ

ನಾವ್ ಸ್ವಾಗತ ಕೋರ್ತಾ ಇರ್ತೀವ್ರೀ

ನೀವ ಮಾತಾಡ್ರೀ ಓದ್ತಾ ಇರಿ

ಬರೀತಾ ಇರಿ ಕನ್ನಡಾರೀ, ಮರಿಬ್ಯಾಡ್ರಿ

ಸದಾ ರಾಮನ ಸೇವೆಗಾಗಿ ಕಾದಿದ್ದಳು ಆ 'ಶಬರಿ'

ಸದಾ ನಿಮ್ಮ ಸೇವೆಗಾಗಿ ತನ ಸಿಬ್ಬಂದಿ ಜೊತೆ

ಕಾಯುತ್ತಿರುವ ಈ 'ಶಬರಿ'

ನಮಸ್ಕಾರ ರೀ ಧನ್ಯವಾದರೀ

ಪುನಃ ಬನ್ರಿ

ನೂರ್ ರೀ

ಕನ್ನಡಿಗ ರೀ

